# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
(ಒಂಬತ್ತನೇ ಅಧಿವೇಶನ)

## ಕಾರ್ಯಕಲಾಪಗಳ ಪಟ್ಟಿ

ಗುರುವಾರ, ದಿನಾಂಕ 03ನೇ ಮಾರ್ಚ್, 2016
(ಸಮಯ: ಬೆಳಗ್ಗೆ 11.00 ಗಂಟೆಗೆ)

### 1. ರಾಜ್ಯಪಾಲರ ಭಾಷಣಕ್ಕೆ ಸಂಬಂಧಿಸಿದ ವಂದನಾರ್ಪಣಾ ಪ್ರಸ್ತಾವ

"2016ರ ಫೆಬ್ರವರಿ 29ರಂದು ವಿಧಾನಮಂಡಲದ ಉಭಯ ಸದನಗಳ ಸದಸ್ಯರನ್ನುದ್ದೇಶಿಸಿ ದಯಪಾಲಿಸಿದ ಭಾಷಣಕ್ಕಾಗಿ ಈ ಅಧಿವೇಶನದಲ್ಲಿ ಸೇರಿರುವ ವಿಧಾನಸಭೆಯ ಸದಸ್ಯರಾದ ನಾವು ಮಾನ್ಯ ರಾಜ್ಯಪಾಲರಿಗೆ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸಲು ಅಪ್ಪಣೆ ಕೋರುತ್ತೇವೆ" ಎಂದು ದಿನಾಂಕ 01ನೇ ಮಾರ್ಚ್ 2016ರಂದು ಶ್ರೀ ಕೆ.ಆರ್.ರಮೇಶ್‌ಕುಮಾರ್ ರವರು ಸೂಚಿಸಿದ ಪ್ರಸ್ತಾವದ ಮೇಲೆ ಚರ್ಚೆ.

### 2. ಪ್ರಶ್ನೋತ್ತರ

**ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಮೂರನೇ ಪಟ್ಟಿ**
**ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಮೂರನೇ ಪಟ್ಟಿ**

### 3. ಸಭೆಯ ಮುಂದಿಡಲಾಗುವ ಕಾಗದ ಪತ್ರಗಳು

**ಶ್ರೀ ಸಿದ್ದರಾಮಯ್ಯ (ಮುಖ್ಯಮಂತ್ರಿಗಳು) ಅವರು:-**

ಭಾರತ ಸಂವಿಧಾನದ 151 (2)ನೇ ಅನುಚ್ಛೇದದ ಮೇರೆಗೆ ಮಾರ್ಚ್ 2015ಕ್ಕೆ ಕೊನೆಗೊಂಡ ವರ್ಷಕ್ಕೆ ನೀಡಿರುವ ಆರ್ಥಿಕ ವಲಯ (ಸಂಖ್ಯೆ-2) ಮತ್ತು ರಾಜಸ್ವ ವಿಭಾಗ ಮೇಲಿನ ವರದಿ (ಸಂಖ್ಯೆ-3)ಗಳನ್ನು ಸಭೆಯ ಮುಂದಿಡುವುದು.

### 4. ವರದಿಯನ್ನೊಪ್ಪಿಸುವುದು

ಶ್ರೀ ಎನ್.ಹೆಚ್. ಶಿವಶಂಕರ ರೆಡ್ಡಿ (ಉಪ ಸಭಾಧ್ಯಕ್ಷರು ಹಾಗೂ ಅಧ್ಯಕ್ಷರು, ಖಾಸಗಿ ಸದಸ್ಯರುಗಳ ವಿಧೇಯಕ ಹಾಗೂ ನಿರ್ಣಯಗಳ ಸಮಿತಿ) ಅವರು - 2015-16ನೇ ಸಾಲಿನ ಖಾಸಗಿ ಸದಸ್ಯರುಗಳ ವಿಧೇಯಕ ಹಾಗೂ ನಿರ್ಣಯಗಳ ಸಮಿತಿಯ ಏಳನೇ ವರದಿಯನ್ನೊಪ್ಪಿಸುವುದು.

## 5. ಶಾಸನ ರಚನೆ

### ವಿಧೇಯಕಗಳನ್ನು ಮಂಡಿಸುವುದು

1. **ಕರ್ನಾಟಕ ಲೋಕಸೇವಾ ಆಯೋಗ (ವ್ಯವಹಾರ ನಿರ್ವಹಣೆ ಮತ್ತು ಹೆಚ್ಚುವರಿ ಪ್ರಕಾರ್ಯಗಳು) (ತಿದ್ದುಪಡಿ) ವಿಧೇಯಕ, 2016**
   **ಶ್ರೀ ಸಿದ್ದರಾಮಯ್ಯ (ಮುಖ್ಯಮಂತ್ರಿ) ಅವರು:-**

   ಅ) 2016ನೇ ಸಾಲಿನ ಕರ್ನಾಟಕ ಲೋಕಸೇವಾ ಆಯೋಗ (ವ್ಯವಹಾರ ನಿರ್ವಹಣೆ ಮತ್ತು ಹೆಚ್ಚುವರಿ ಪ್ರಕಾರ್ಯಗಳು) (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;
   ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

2. **ಬಾಲ್ಯವಿವಾಹ ನಿಷೇಧ (ಕರ್ನಾಟಕ ತಿದ್ದುಪಡಿ) ವಿಧೇಯಕ, 2016**
   **ಶ್ರೀಮತಿ ಉಮಾಶ್ರೀ (ಮಹಿಳಾ ಮತ್ತು ಮಕ್ಕಳ ಕಲ್ಯಾಣ, ಕನ್ನಡ ಮತ್ತು ಸಂಸ್ಕೃತಿ ಸಚಿವರು) ಅವರು:-**
   ಅ) 2016ನೇ ಸಾಲಿನ ಬಾಲ್ಯವಿವಾಹ ನಿಷೇಧ (ಕರ್ನಾಟಕ ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;
   ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

3. **ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ ವಿಧೇಯಕ, 2016**
   **ಶ್ರೀ ಹೆಚ್.ಆಂಜನೇಯ (ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು) ಅವರು:-**
   ಅ) 2016ನೇ ಸಾಲಿನ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;
   ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

4. **ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ (ತಿದ್ದುಪಡಿ) ವಿಧೇಯಕ,2016**
   **ಶ್ರೀ ಖಮರ್ ಉಲ್ ಇಸ್ಲಾಂ (ಪೌರಾಡಳಿತ, ಸ್ಥಳೀಯ ಸಂಸ್ಥೆಗಳು, ಸಾರ್ವಜನಿಕ ಉದ್ದಿಮೆಗಳು ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಮತ್ತು ವಕ್ಫ್ ಸಚಿವರು) ಅವರು:-**

   ಅ) 2016ನೇ ಸಾಲಿನ ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ (ತಿದ್ದುಪಡಿ) ವಿಧೇಯಕ,2016 ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;
   ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

## 6. ಗಮನ ಸೆಳೆಯುವ ಸೂಚನೆಗಳು

1. **ಶ್ರೀ ಮಾಲೀಕಯ್ಯ ವೆಂಕಯ್ಯ ಗುತ್ತೇದಾರ** ರವರು - ಬರಗಾಲ ಪೀಡಿತ ಪ್ರದೇಶವಾಗಿ ಘೋಷಣೆಗೊಂಡಿರುವ ಕಲಬುರುಗಿ ಜಿಲ್ಲೆಯ ಅಫಜಲಪುರ ಕ್ಷೇತ್ರದ ರೈತರು ಮತ್ತು ಸಾರ್ವಜನಿಕರಿಗೆ ಕೂಡಲೆ ಕುಡಿಯುವ ನೀರಿನ ಸೌಲಭ್ಯ, ಬರಗಾಲದ ಪರಿಹಾರ ಹಾಗೂ ಬೆಳೆವಿಮೆ ಪರಿಹಾರ ನೀಡುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

3...

2. **ಶ್ರೀ ಸಿದ್ದು ಭೀ ನ್ಯಾಮಗೌಡ** ರವರು – ಕುಡಿಯುವ ನೀರಿನ ಭೀಕರ ಸಮಸ್ಯೆಯಿಂದ ಬಳಲುತ್ತಿರುವ ಕೃಷ್ಣಾನದಿ ದಂಡೆಯ ನೂರಾರು ಹಳ್ಳಿಗಳ ಜನರು ಮತ್ತು ಜಾನುವಾರುಗಳಿಗೆ ಆಗುತ್ತಿರುವ ಸಮಸ್ಯೆಯನ್ನು ನೀಗಿಸುವ ಸಲುವಾಗಿ ವಾರಣಾ/ಕೊಯ್ನಾ ಡ್ಯಾಂ ನಿಂದ ನೀರನ್ನು ಬಿಡಿಸಲು ಮಹಾರಾಷ್ಟ್ರ ಸರ್ಕಾರದೊಂದಿಗೆ ಮಾತುಕತೆ ನಡೆಸಿ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಜಲಸಂಪನ್ಮೂಲ ಸಚಿವರ ಗಮನ ಸೆಳೆಯುವುದು.

3. **ಶ್ರೀ ಎಂ.ಕೃಷ್ಣಾರೆಡ್ಡಿ** ರವರು – ಚಿಕ್ಕಬಳ್ಳಾಪುರ ಜಿಲ್ಲೆಯ ಕನಂಪಲ್ಲಿ ಗ್ರಾಮದ ಸರ್ವೆ ನಂ. 11ರ 1-25 ಗುಂಟೆ ಸರ್ಕಾರಿ ಹುಲ್ಲು ಬನ್ನಿ ಖರಾಬು ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲು ಕೈಗೊಂಡ ಕ್ರಮಗಳ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

4. **ಶ್ರೀ ಜಿ.ಹೆಚ್.ಶ್ರೀನಿವಾಸ್** ರವರು – ತರೀಕೆರೆಯಲ್ಲಿರುವ ಕಾರಾಗೃಹ ಇಲಾಖೆಯ ಸಿಬ್ಬಂದಿಗಳ ವಸತಿ ಗೃಹಗಳು ಶಿಥಿಲವಾಗಿದ್ದು, ಅವುಗಳನ್ನು ದುರಸ್ಥಿಗೊಳಿಸುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

5. **ಶ್ರೀಮತಿ ಜೊಲ್ಲೆ ಶಶಿಕಲಾ ಅಣ್ಣಾಸಾಹೇಬ** ರವರು – ನಿಪ್ಪಾಣಿ ಮತಕ್ಷೇತ್ರದ ಮಾಂಗೂರ ಮತ್ತು ಕಾರದಗಾ ಗ್ರಾಮಗಳಲ್ಲಿ ಇತ್ತೀಚೆಗೆ ಶಾರ್ಟಸರ್ಕ್ಯೂಟ್‌ನಿಂದ ಉಂಟಾದ ಬೆಂಕಿ ಆಕಸ್ಮಿಕದಲ್ಲಿ ಅಪರೂಪದ ಜಾನುವಾರುಗಳು ಬಲಿಯಾಗಿರುವುದರಿಂದ ನಷ್ಟಕ್ಕೊಳಗಾಗಿರುವ ರೈತ ಕುಟುಂಬಗಳಿಗೆ ಅಗತ್ಯ ಪರಿಹಾರವನ್ನು ನೀಡುವ ಬಗ್ಗೆ ಮಾನ್ಯ ಪಶುಸಂಗೋಪನೆ ಮತ್ತು ರೇಷ್ಮೆ ರಾಜ್ಯ ಸಚಿವರ ಗಮನಸೆಳೆಯುವುದು.

6. **ಶ್ರೀ ಹೆಚ್.ಡಿ.ರೇವಣ್ಣ** ರವರು – ಹಾಸನ, ಚನ್ನರಾಯಪಟ್ಟಣ ಮತ್ತು ಹೊಳೆನರಸೀಪುರ ತಾಲ್ಲೂಕುಗಳ ಗ್ರಾಮಗಳಿಗೆ ಕುಡಿಯುವ ನೀರಿನ ಯೋಜನೆಗಳಿಗೆ **"ಬಹುಗ್ರಾಮ ಯೋಜನೆ"** ಅಡಿಯಲ್ಲಿ ಕಾಮಗಾರಿಗಳ ಪ್ರಾಥಮಿಕ ಸರ್ವೆ ಕಾಮಗಾರಿ ಮುಗಿದಿದ್ದು, ಕಾವೇರಿ ನೀರಾವರಿ ನಿಗಮದ ವತಿಯಿಂದ ಸದರಿ ಯೋಜನೆಗೆ ಅನುಮೋದನೆ ದೊರೆತಿದ್ದರೂ **SLSSC** ಸಮಿತಿಗೆ ಪ್ರಸ್ತಾವನೆಯು ಮಂಡನೆಯಾಗದಿರುವ ಬಗ್ಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

7. **ಶ್ರೀ ಕೆ.ಆರ್.ರಮೇಶ್ ಕುಮಾರ್** ರವರು – ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಇತ್ತೀಚಿನ ಆದೇಶದಂತೆ ತುಮಕೂರು ನಗರದಲ್ಲಿರುವ ಶ್ರೀದೇವಿ ವೈದ್ಯಕೀಯ ಕಾಲೇಜಿನಲ್ಲಿ ಪ್ರವೇಶಾತಿ ಪಡೆದಿರುವ ವಿದ್ಯಾರ್ಥಿಗಳನ್ನು ಕಾಲೇಜಿನಿಂದ ಹೊರ ಹಾಕಿರುವ ಬಗ್ಗೆ ಮಾನ್ಯ ವೈದ್ಯಕೀಯ ಶಿಕ್ಷಣ ರಾಜ್ಯ ಸಚಿವರ ಗಮನ ಸೆಳೆಯುವುದು.

8. **ಶ್ರೀ ಸಿ.ಎನ್.ಬಾಲಕೃಷ್ಣ** ರವರು – ಕೊಬ್ಬರಿ ಮಾರಾಟದಲ್ಲಿ ಮಧ್ಯವರ್ತಿಗಳು ಹಾಗೂ ಅಧಿಕಾರಿಗಳ ಶಾಮೀಲಿನಿಂದಾಗಿ ಕಡಿಮೆ ಬೆಲೆಗೆ ನಿಗದಿಗೊಳ್ಳುವ ಕೊಬ್ಬರಿಯ ಬೆಲೆಯಿಂದ ಈಗಾಗಲೇ ಅನಾವೃಷ್ಟಿಯಿಂದ ಆರ್ಥಿಕ ನಷ್ಟವನ್ನು ಅನುಭವಿಸುತ್ತಿರುವ ತೆಂಗು ಬೆಳೆಗಾರರ ಸಂಕಷ್ಟದ ಬಗ್ಗೆ ಮಾನ್ಯ ಕೃಷಿ ಮಾರುಕಟ್ಟೆ ಮತ್ತು ತೋಟಗಾರಿಕೆ ಸಚಿವರ ಗಮನ ಸೆಳೆಯುವುದು.

9. **ಶ್ರೀಯುತರುಗಳಾದ ಕೆ.ಎಂ.ಶಿವಲಿಂಗೇಗೌಡ, ಹೆಚ್.ಡಿ.ರೇವಣ್ಣ ಮತ್ತು ಹೆಚ್.ಎಸ್.ಪ್ರಕಾಶ್** ರವರುಗಳು – ರಾಜ್ಯದಲ್ಲಿರುವ ಹಾಲು ಒಕ್ಕೂಟಗಳು ಹಾಗೂ ರೈತರಿಗೆ ಆಗುತ್ತಿರುವ ನಷ್ಟವನ್ನು ಜಿಲ್ಲಾ ಒಕ್ಕೂಟಗಳ ಸಭೆ ಕರೆದು ನಷ್ಟ ಭರಿಸಲಾಗುವುದೆಂದು ನೀಡಿರುವ ಆಶ್ವಾಸನೆ ಬಗ್ಗೆ ಮಾನ್ಯ ಮುಖ್ಯ ಮಂತ್ರಿಗಳ ಗಮನ ಸೆಳೆಯುವುದು.

10. **ಶ್ರೀಯುತರುಗಳಾದ ಬಿ.ಬಿ.ನಿಂಗಯ್ಯ ಮತ್ತು ಹೆಚ್.ಕೆ.ಕುಮಾರಸ್ವಾಮಿ** ರವರುಗಳು – ರಾಜ್ಯದಲ್ಲಿ ಡಾ: ಅಂಬೇಡ್ಕರ್ ಅಭಿವೃದ್ಧಿ ನಿಗಮ (ಪರಿಶಿಷ್ಟ ಜಾತಿ) ಮತ್ತು ಕರ್ನಾಟಕ ಮಹರ್ಷಿ ವಾಲ್ಮೀಕಿ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮದಿಂದ ಭೂ ಒಡೆತನ ಯೋಜನೆಯಡಿ ಭೂಮಿ ಖರೀದಿಗೆ ನಿಗದಿಪಡಿಸಿರುವ ವ್ಯಾಪ್ತಿಯ ಮಿತಿಯನ್ನು ವಿಸ್ತರಿಸುವ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಗಮನ ಸೆಳೆಯುವುದು.

11. **ಶ್ರೀ ಪಿ.ಆರ್.ಸುಧಾಕರ್ ಲಾಲ್** ರವರು – 2014-15ನೇ ಸಾಲಿನಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಜನಾಂಗದವರಿಗೆ ಸಣ್ಣ ನೀರಾವರಿ ಇಲಾಖೆಯಿಂದ ಕೊಳವೆ ಬಾವಿಗಳು ಮಂಜೂರಾಗಿದ್ದರೂ ನೀರಾವರಿ ಸೌಲಭ್ಯ ಕಲ್ಪಿಸಲು ಸರ್ಕಾರ ವಿಳಂಬ ನೀತಿ ಅನುಸರಿಸುತ್ತಿರುವ ಬಗ್ಗೆ ಮಾನ್ಯ ಸಣ್ಣ ನೀರಾವರಿ ಸಚಿವರ ಗಮನ ಸೆಳೆಯುವುದು.

12. **ಶ್ರೀ ಡಿ.ಎನ್.ಜೀವರಾಜ್** ರವರು – ರಾಜ್ಯದಲ್ಲಿ ಅತಿಥಿ ಉಪನ್ಯಾಸಕರು ವೇತನ ವಿಳಂಬವನ್ನು ಖಂಡಿಸಿ ಪ್ರತಿಭಟನೆ ನಡೆಸುತ್ತಿದ್ದು, ಪರೀಕ್ಷೆ ಸಮಯದಲ್ಲಿ ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತಿರುವ ಬಗ್ಗೆ ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಉನ್ನತ ಶಿಕ್ಷಣ ಸಚಿವರ ಗಮನ ಸೆಳೆಯುವುದು.

13. **ಶ್ರೀ ಎಲ್.ಎ.ರವಿಸುಬ್ರಮಣ್ಯ** ರವರು – ಕರ್ನಾಟಕದ ಜೀವನದಿಯಾದ ಕಾವೇರಿ ನದಿಯಲ್ಲಿ ಮಾಲಿನ್ಯ ಮತ್ತು ಅಕ್ರಮ ಮರಳುಗಾರಿಕೆಯನ್ನು ತಡೆಗಟ್ಟುವ ಬಗ್ಗೆ ಮಾನ್ಯ ಭಾರಿ ಮತ್ತು ಮಧ್ಯಮ ನೀರಾವರಿ ಸಚಿವರ ಗಮನ ಸೆಳೆಯುವುದು.

## 7. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

1. ಶ್ರೀ ಕೆ.ಆರ್.ರಮೇಶ್ ಕುಮಾರ್ ರವರು ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ರೇಷ್ಮೆಯನ್ನು ವೃತ್ತಿಯನ್ನಾಗಿ ನಂಬಿರುವ ರೈತರು ವಿವಿಧ ಬ್ಯಾಂಕುಗಳಲ್ಲಿ ಸಾಲ ಪಡೆದು ಹಿಂದಿರುಗಿಸಲು ಸಾಧ್ಯವಾಗದೆ ತೀರಾ ಸಂಕಷ್ಟದಲ್ಲಿರುವುದರಿಂದ ರೇಷ್ಮೆ ಕೃಷಿಕರ ಸಾಲ ವಸೂಲಾತಿಯನ್ನು ಮುಂದೂಡುವುದು, ಸಾಲದ ಮೇಲಿನ ಬಡ್ಡಿ ಮತ್ತು ಸುಸ್ತಿ ಬಡ್ಡಿಯನ್ನು ಮನ್ನಾ ಮಾಡಿ, ಗರಿಷ್ಠ ಮೊತ್ತದ ಸಾಲ ಪಡೆದವರಿಗೆ 4-5 ಸುಲಭ ಕಂತುಗಳಲ್ಲಿ ಸಾಲವನ್ನು ಪಾವತಿಸಲು 2017ರ ಮಾರ್ಚ್ ವರೆಗೆ ಅವಕಾಶ ಕಲ್ಪಿಸಿಕೊಡುವ ವಿಷಯದ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

2. ಶ್ರೀಯುತರುಗಳಾದ ಕೆ.ಎಸ್.ಪುಟ್ಟಣ್ಣಯ್ಯ, ತನ್ವೀರ್ ಸೇಟ್, ಚೆಲುವರಾಯಸ್ವಾಮಿ ಮತ್ತು ವಾಸು ಅವರುಗಳು ಮೈಸೂರಿನ ಫಾಲ್ಕನ್ ಟೈರ್ಸ್ ಕಾರ್ಖಾನೆಯ ಇತ್ತೀಚಿನ ಬೆಳವಣಿಗೆ ಮತ್ತು ಕಂಪನಿಯನ್ನು ಮುನ್ನಡೆಸಲು ಪರ್ಯಾಯ ವ್ಯವಸ್ಥೆ ಕಲ್ಪಿಸುವ ಬಗ್ಗೆ ನೀಡಿರುವ ಸೂಚನೆಯ ಬಗ್ಗೆ ಚರ್ಚೆ

## ೮. ಖಾಸಗಿ ಸದಸ್ಯರ ಕಾರ್ಯಕಲಾಪಗಳು

### I. ಖಾಸಗಿ ನಿರ್ಣಯ

**ಶ್ರೀ ಕೆ. ಗೋಪಾಲಯ್ಯ, ಶ್ರೀ ಹೆಚ್.ಸಿ. ಬಾಲಕೃಷ್ಣ ಮತ್ತು ಶ್ರೀ ಹೆಚ್.ಡಿ. ರೇವಣ್ಣ** ಅವರುಗಳು – ಈ ಕೆಳಕಂಡ ನಿರ್ಣಯವನ್ನು ಮಂಡಿಸುವುದು.

"ಬೆಂಗಳೂರಿನಲ್ಲಿರುವ ಕೇಂದ್ರ ಸರ್ಕಾರಿ ಸ್ವಾಮ್ಯದ ಪ್ರತಿಷ್ಟಿತ ಹೆಚ್.ಎಂ.ಟಿ. ಗಡಿಯಾರದ ಘಟಕವನ್ನು ಮೇಕ್ ಇನ್ ಇಂಡಿಯಾ ಹಿನ್ನೆಲೆಯಲ್ಲಿ ಪುನಶ್ಚೇತನಗೊಳಿಸಬೇಕೆಂದು ಈ ಸದನವು ನಿರ್ಣಯಿಸುತ್ತದೆ."

### II. ಖಾಸಗಿ ಸದಸ್ಯರ ವಿಧೇಯಕಗಳನ್ನು ಪರ್ಯಾಲೋಚಿಸುವುದು ಹಾಗೂ ಅಂಗೀಕರಿಸುವುದು

**(i) ಕರ್ನಾಟಕ ರಾಜ್ಯ ವಿವಾಹ ವಿಧಿವಿಧಾನಗಳ ನಿಯಂತ್ರಣ ವಿಧೇಯಕ, 2015**
**(2015ರ ಖಾಸಗಿ ಸದಸ್ಯರ ವಿಧೇಯಕ-01)**
**ಶ್ರೀ ಕೆ.ಆರ್. ರಮೇಶ್ ಕುಮಾರ್ (ವಿಧಾನ ಸಭಾ ಸದಸ್ಯರು) ಅವರು:-**

ಅ) 2015ನೇ ಸಾಲಿನ ಕರ್ನಾಟಕ **ರಾಜ್ಯ ವಿವಾಹ ವಿಧಿವಿಧಾನಗಳ ನಿಯಂತ್ರಣ ವಿಧೇಯಕ (2015ರ ಖಾಸಗಿ ಸದಸ್ಯರ ವಿಧೇಯಕ-01)** ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**(ii) ಕರ್ನಾಟಕ ಭೂ ಕಂದಾಯ (ಖಾಸಗಿ ಸದಸ್ಯರ ತಿದ್ದುಪಡಿ) ವಿಧೇಯಕ, 2015**
**(2015ರ ಖಾಸಗಿ ಸದಸ್ಯರ ವಿಧೇಯಕ-02)**
**ಶ್ರೀ ಕೆ. ಶಿವಮೂರ್ತಿ (ವಿಧಾನ ಸಭಾ ಸದಸ್ಯರು) ಅವರು:-**

ಅ) 2015ನೇ ಸಾಲಿನ ಕರ್ನಾಟಕ **ಭೂ ಕಂದಾಯ (2015ರ ಖಾಸಗಿ ಸದಸ್ಯರ ವಿಧೇಯಕ-02)** ವಿಧೇಯಕವನ್ನು ಮಂಡಿಸಲು ಪರ್ಯಾಲೋಚಿಸಬೇಕೆಂದು ಸೂಚಿಸುವುದು

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**ಎಸ್.ಮೂರ್ತಿ**
**ಕಾರ್ಯದರ್ಶಿ (I/c)**

---

**ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.**
http://kla.kar.nic.in/assembly/lob/lob.htm